# ವರ್ತಮಾನದ ಕನ್ನಡ ಸಾಹಿತ್ಯ : ಪ್ರತಿಸ್ಪಂದನೆಗಳು
## ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಪ್ರಬಂಧಗಳು

ಪ್ರಧಾನ ಸಂಪಾದಕರು

**ಡಾ. ಎಂ. ದೇವಿಕಾ**

ಸಂಪಾದಕರು

**ಡಾ. ಹೆಚ್. ಎಲ್. ರೇಖಾ**

**ಡಾ. ಜಿ. ಆನಂದ**

**ಡಾ. ಕೆ. ಎನ್. ಗಿರೀಶ**



ಪ್ರಕಾಶಕರು

**ಶಾರದಾ ವಿಲಾಸ ಕಾಲೇಜು**

**ಕನ್ನಡ ವಿಭಾಗ**

# ವರ್ತಮಾನದ ಕನ್ನಡ ಸಾಹಿತ್ಯ : ಪ್ರತಿಸ್ಪಂದನೆಗಳು
## ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಪ್ರಬಂಧಗಳು

ಪ್ರಧಾನ ಸಂಪಾದಕರು

**ಡಾ. ಎಂ. ದೇವಿಕಾ**

ಸಂಪಾದಕರು

**ಡಾ. ಹೆಚ್. ಎಲ್. ರೇಖಾ**

**ಡಾ. ಜಿ. ಆನಂದ**

**ಡಾ. ಕೆ. ಎನ್. ಗಿರೀಶ**

ಪ್ರಕಾಶಕರು

**ಶಾರದಾ ವಿಲಾಸ ಕಾಲೇಜು**

**ಕನ್ನಡ ವಿಭಾಗ**

**ಕೃಷ್ಣಮೂರ್ತಿಪುರಂ, ಮೈಸೂರು**

# VARTHAMANADA KANNADA SAHITHYA : PRATHISPANDANEGALU



ISBN 978-81-986652-7-0

Published by Sarada Vilas College
Department of Kannada, Krishnamurthypuram, Mysuru

Designed and Set by the Book Vignesh Graphics, Mysuru

Printed in the Karnataka State

| | | |
|---|---|---|
| ISBN | : | 978-81-986652-7-0 |
| Printers | : | Vignesh Graphics, Mysuru |
| First Edition | : | 2025 |
| Pages | : | xx + 186 = 206 |
| Copirignt | : | All rights reserved |
| Copies | : | 500 Copies |
| Price | : | Rs. 180/- |
| Cover Page | : | Vignesh Graphics |
| Layout | : | Bhargav |

# ಪರಿವಿಡಿ

# ಅರಿಸಮಾಸ : ಆಧುನಿಕ ಕನ್ನಡ ಸಂಶೋಧನೆಯ ಪ್ರತಿಸ್ಪಂದನೆಗಳು

-ಸುಂದ್ರೇಶ್ ಕೆ.ಎಸ್

ಶಾಸ್ತ್ರ ವಿಷಯಗಳ ಸಂಶೋಧನೆಗಿಂತ ಸೃಜನಶೀಲ ಸಂಶೋಧನೆಯತ್ತಲೇ ಹೆಚ್ಚು ಆಕರ್ಷಿತರಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಅರಿಸಮಾಸದ ಬಗ್ಗೆ ಕಲಿತು, ಕಲಿಸುತ್ತಿದ್ದರು ಹೆಚ್ಚಿನ ಮತ್ತು ಸ್ಪಷ್ಟ ವಿಚಾರಗಳನ್ನು ಗ್ರಹಿಸಬೇಕು, ತಿಳಿಯಬೇಕು, ತಿಳಿಸಬೇಕು. ವ್ಯಾಕರಣಕ್ಕೆ ಸಂಬಂಧಿಸಿದ ಪರಿಕಲ್ಪನೆಯಾದ ಅರಿಸಮಾಸ ಪದದ ದಾಖಲಿತ ಉಲ್ಲೇಖ ನಮಗೆ ಲಭ್ಯವಾಗುವುದು ಕೇಶಿರಾಜನ ಶಬ್ದಮಣಿದರ್ಪಣದಲ್ಲಿ (೧೭೮ನೇ ಸೂತ್ರದ ಪ್ರಯೋಗದಲ್ಲಿ ಅರಿಪದ ಎಂದು, ೧೭೯ನೇ ಸೂತ್ರದಲ್ಲಿ ಅರಿಪದ, ವೃತ್ತಿಯಲ್ಲಿ ಅರಿಸಮಾಸ ಎಂದು, ೧೮೫ನೇ ಸೂತ್ರದಲ್ಲಿ ಅರಿಸಮಾಸ ಎಂಬ ಅರ್ಥದಲ್ಲಿ ವಿರುದ್ಧ ಸಮಾಸ ಎಂದು, ೧೮೬ನೇ ಸೂತ್ರದಲ್ಲಿ ಅರಿಸಮಾಸ ಎಂಬ ಅರ್ಥದಲ್ಲಿ ದೋಷವಿಲ್ಲ ಎಂದು) ಶ್ರೀವಿಜಯನ ಕವಿರಾಜಮಾರ್ಗದಲ್ಲಾಗಲಿ, ಎರಡನೇ ನಾಗವರ್ಮನ ಶಬ್ದಸ್ಮೃತಿಯಲ್ಲಾಗಲಿ, ಕರ್ಣಾಟಕ ಭಾಷಾಭೂಷಣದಲ್ಲಾಗಲಿ ಈ ಪದದ ಪ್ರಸ್ತಾಪವಿಲ್ಲ.

ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಪದಗಳು ಸೇರಿ ಸಾಧಿತ ಶಬ್ದಗಳಾದ ಪದಗಳೆ ಸಮಾಸ ಪದಗಳು. ಶಾಸ್ತ್ರಕಾರರು ಸಮಾಸ ಎಂಬುದಕ್ಕೆ ಸಮಸ್ತಪದ ಎಂಬುದನ್ನು ಬಳಸಿರುವುದು ರೂಢಿ. ಅರಿಸಮಾಸದ(ಅರಿ ಎಂದರೆ ಶತ್ರು, ಸಮಾಸ ಎಂದರೆ ಸಮಸ್ತ ಪದ) ಬಗ್ಗೆ ಚರ್ಚಿಸುವುದಕ್ಕಿಂತ ಮೊದಲು ನಾವು ಗ್ರಹಿಸಬೇಕಾದ ವಿಚಾರಗಳೆಂದರೆ ಅರಿ ಸಮಾಸ ಎಂಬುದು ಎಂಟು ಸಮಾಸಗಳಂತೆ ಸಮಾಸವಲ್ಲ ಅಥವಾ ಸಮಾಸವೆಂದು ಪರಿಗಣಿಸಿಲ್ಲ, ಪರಿಗಣಿಸಬೇಕಿಲ್ಲ ಏಕೆಂದರೆ ಇದು ಸಮಾಸವಾಗುವ ಕ್ರಿಯೆಯಲ್ಲ. ಎರಡು ಪದಗಳು ಸೇರುವ ಪ್ರಕ್ರಿಯೆ ಅಥವಾ ಭಾಷಾ ತತ್ವ. ಆದರೆ ಒಂದಕ್ಕಿಂತ ಹೆಚ್ಚು ಕನ್ನಡ-ಸಂಸ್ಕೃತ, ಸಂಸ್ಕೃತ-ಕನ್ನಡ ಸೇರಿ ಸಮಸ್ತ ಪದವಾದರೆ ಅದನ್ನು ಅರಿಸಮಾಸವೆಂಬ ಹೆಸರಿನಿಂದ ಗುರುತಿಸಿ ಅದನ್ನು ಒಂದು ಸಮಾಸವೆಂದು ಹೇಳುವ ತಿಳಿಯುವ, ಗ್ರಹಿಸುವ, ಕಲಿಸುವ ಪರಿಪಾಠ ಮತ್ತು ಪರೀಕ್ಷೆಗಳಲ್ಲಿ ಅದನ್ನು ಒಂದು ಸಮಾಸವೆಂದೆ ಪ್ರಶ್ನೆಯನ್ನು ಕೇಳಿ ಉತ್ತರವನ್ನು ನಿರೀಕ್ಷಿಸುವ ಪ್ರಕ್ರಿಯೆ ನಡೆಯುತ್ತಿದೆ. ನಾವು ಅರಿಸಮಾಸವೆಂದು ಭಾವಿಸುವ, ಪರಿಗಣಿಸುವ, ತಿಳಿಸುವ ಸಮಸ್ತ ಪದಗಳೆಲ್ಲವೂ

೨) ಅರಿಸಮಾಸವೆಂಬುದು ಸಮಾಸವಲ್ಲ.

ಅರಿಸಮಾಸವೆಂದು ಭಾವಿಸುವ, ಪರಿಗಣಿಸುವ, ತಿಳಿಸುವ ಸಮಸ್ತ ಪದಗಳೆಲ್ಲವೂ ಯಾವುದಾದರೂ ಒಂದು ಸಮಾಸವಾಗಿರುತ್ತದೆ ಉದಾಹರಣೆ: ಮಳೆಗಾಲ ಎಂಬುದು ತತ್ಪುರುಷಸಮಾಸ. ಮಳೆ ಕನ್ನಡ ಪದ, ಕಾಲ ಸಂಸ್ಕೃತ ಪದವಾದ್ದರಿಂದ ಅರಿಸಮಾಸ. ಮಂಗಳಾರತಿ ಎಂಬುದು ಕರ್ಮಧಾರಯ ಸಮಾಸ. ಮಂಗಳ ಸಂಸ್ಕೃತ ಪದ ಆರತಿ ಕನ್ನಡ ಪದ ಆದ್ದರಿಂದ ಅರಿಸಮಾಸ.

೩) ಅರಿಸಮಾಸದ ಬಗ್ಗೆ ಕವಿರಾಜಮಾರ್ಗಕಾರನ ವಿಚಾರಗಳೇನು?

ಕವಿರಾಜಮಾರ್ಗಕಾರ ಪ್ರಥಮ ಪರಿಚ್ಛೇಧದ ೫೧ನೇ ಪದ್ಯದಿಂದ ೬೧ನೇ ಪದ್ಯದ ವರಗೆ ಸಂಸ್ಕೃತ ಪದಗಳು ಕನ್ನಡದಲ್ಲಿ ಬಳಕೆಯಾಗುವ ವಿಚಾರವನ್ನು ತಿಳಿಸುತ್ತಾನೆ. (ಸಮಸಂಸ್ಕೃತ, ಅವ್ಯಯ ಇತ್ಯಾದಿ) ಸಂಸ್ಕೃತ ಕನ್ನಡ ಪದಗಳನ್ನು ಸೇರಿಸಿ ಸಮಾಸ ಮಾಡಬಾರದು ಎಂಬುದನ್ನು ೫೮ನೇ ಸೂತ್ರದಲ್ಲಿ ಹೇಳಿ, ೫೯ನೇ ಸೂತ್ರದಲ್ಲಿ ಸಮಾಸ (ಅರಿಸಮಾಸ) ದೋಷಕ್ಕೆ ಉದಾಹರಣೆಗಳನ್ನು ಹೇಳಿ, ೬೦ನೇ ಸೂತ್ರದಲ್ಲಿ ಸಮಾಸದೋಷ(ಅರಿಸಮಾಸ)ಗಳನ್ನು ತಿದ್ದಿ ಹೇಳುತ್ತಾನೆ. ಆದರೆ ಮಾರ್ಗಕಾರ ಅರಿಸಮಾಸವೆಂಬ ಪದವನ್ನು ಬಳಸಿಲ್ಲ..

| | |
|---|---|
| ಅರಿಸಮಾಸದೋಷ | ದೋಷ ತಿದ್ದಿದ್ದಕ್ಕೆ |
| ಅರಸುಕುಮಾರ | ನರಪತಿತನಯ |
| ಆಯತತರಕಡೆಗಣ್ಣು | ಆಯತತರಳಾಪಾಂಗದೊಳ್ |
| ಕೆಳದಿಸಮೇತಂ | ಕೆಳದಿಯರೊಡನೆ |
| ಪರಿಗತನಗೆ | ಪರಿಗತಹಾಸ್ಯ |
| ಗುರುನಾಣ್ಭರ | ಗುರುಲಜ್ಜಾಭರ |
| ಮುಖತಾವರೆ | ಮುಖಸರಸಿಜಮಂ |

೪) ಅರಿಸಮಾಸದ ಬಗ್ಗೆ ಎರಡನೇ ನಾಗವರ್ಮನ ವಿಚಾರಗಳೇನು?

"ನಾಗವರ್ಮನಲ್ಲಿ ಅರಿಸಮಾಸ ಸಂಬಂಧಿಯಾದ ಸೂತ್ರಗಳು ದೊರೆಯುವುದಿಲ್ಲ. ಆದರೂ ಕೆಲವು ವಿದ್ವಾಂಸರು ನಾಗವರ್ಮ ಸಮಸಂಸ್ಕೃತಕ್ಕೆ ಸಂಬಂಧಿಸಿದಂತೆ ಹೇಳಿರುವ ಸೂತ್ರ(ಸೂತ್ರ:೧೩೨ ಭಾಷಾಭೂಷಣ ಮತ್ತು ಸೂತ್ರ : ೬೩ ಶಬ್ದಸ್ಮೃತಿ)ಗಳನ್ನು ಅರಿಸಮಾಸಕ್ಕೆಂದು ಉದಾಹರಿಸುವುದು ಪ್ರಸಿದ್ಧವಾಗಿದೆ. ಸಂಸ್ಕೃತ ಶಬ್ದಗಳು ಸಮಸಂಸ್ಕೃತ ಶಬ್ದಗಳಿಗಿಂತ ಪ್ರತ್ಯೇಕವಾದುವೆಂಬುದನ್ನು ವೈಯಾಕರಣರ

ನಿಲುವಿನಿಂದ ಅರಿತಿರುವುದರಿಂದ ಸಮಸಂಸ್ಕೃತಕ್ಕೆಂದು ನಾಗವರ್ಮ ಉದಾಹರಿಸಿರುವ ಸೂತ್ರಗಳನ್ನು ಅರಿಸಮಾಸಕ್ಕೆಂದು ಆರೋಪಿಸುವುದು ಸಾಧುವಲ್ಲ"೧ ಎಂಬ ಅಭಿಪ್ರಾಯವು ಸೂಕ್ತವೆನಿಸುತ್ತದೆ.

೫) ಅರಿಸಮಾಸದ ಬಗ್ಗೆ ಕೇಶಿರಾಜನ ವಿಚಾರಗಳೇನು?

ಕೇಶಿರಾಜ ಶಬ್ದಮಣಿದರ್ಪಣದ ನಾಮಪ್ರಕರಣ ಮತ್ತು ಅಪಭ್ರಂಶ ಪ್ರಕರಣದಲ್ಲಿ ಪರೋಕ್ಷವಾಗಿ ಸಮಸಂಸ್ಕೃತ, ತತ್ಸಮಗಳನ್ನು ಹೇಳುವಾಗ ಹಾಗೂ ಸಮಾಸ ಪ್ರಕರಣದಲ್ಲಿ ನೇರವಾಗಿ ಅರಿಸಮಾಸದ ಬಗ್ಗೆ ವಿವರಿಸುತ್ತಾನೆ.(೧೭೮ನೇ ಸೂತ್ರದ ಪ್ರಯೋಗದಲ್ಲಿ ಅರಿಪದ ಎಂದು, ೧೭೯ನೇ ಸೂತ್ರದಲ್ಲಿ ಅರಿಪದ , ವೃತ್ತಿಯಲ್ಲಿ ಅರಿಸಮಾಸ ಎಂದು, ೧೮೫ನೇ ಸೂತ್ರದಲ್ಲಿ ಅರಿಸಮಾಸ ಎಂಬ ಅರ್ಥದಲ್ಲಿ ವಿರುದ್ಧ ಸಮಾಸ, ೧೮೬ನೇ ಸೂತ್ರದಲ್ಲಿ ಅರಿಸಮಾಸ ಎಂಬ ಅರ್ಥದಲ್ಲಿ ದೋಷವಿಲ್ಲ ಎಂದು)

ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಸಮಾಸ ಮಾಡಬಾರದು, ಆ ರೀತಿ ಮಾಡಿದರೆ ಅದನ್ನು ಅರಿಸಮಾಸವೆಂದು ಕರೆದು ಪೂರ್ವಕವಿಗಳ ಪ್ರಯೋಗ, ಬಿರುದಾವಳಿಗಳು, ಕ್ರಿಯಾಸಮಾಸ, ಗಮಕಸಮಾಸಗಳಲ್ಲಿ, ಅರಿಸಮಾಸಕ್ಕೆ ದೋಷವಿಲ್ಲವೆಂದೇಳುತ್ತಾನೆ. ಆದರೆ ಈ ವಿನಾಯ್ತಿಗೆ ಕಾರಣವೇನೆಂದು ತಿಳಿಸುವುದಿಲ್ಲ.

೬) ಅರಿಸಮಾಸದ ಬಗ್ಗೆ ಭಟ್ಟಾಕಳಂಕನ ವಿಚಾರಗಳೇನು?

ಕನ್ನಡ ಮತ್ತು ಸಂಸ್ಕೃತ ಪದಗಳು ಸೇರಿದರೆ ಅರಿಸಮಾಸವಾಗುತ್ತದೆ ಎಂದೇಳಿ, ಬಿರುದಾವಳಿ ಮತ್ತು ಪೂರ್ವಕವಿಗಳ ಪ್ರಯೋಗದಲ್ಲಿ ಸಾಧುವೆಂದು ತಿಳಿಸುತ್ತಾನೆ. (ಸೂತ್ರ : ೨೯೫ ತಚ್ಚ ಬಿರುದಾವಲ್ಯಾಂ, ಸೂತ್ರ : ೨೯೬ ಕಡುರಾಗಾದಯ:)

೭) ಹೊಸಗನ್ನಡ ವ್ಯಾಕರಣ ಕೃತಿಗಳಲ್ಲಿ ಅರಿಸಮಾಸದ ಚರ್ಚೆಯ ನಿಲುವುಗಳೇನು? ಹೊಸಗನ್ನಡದಲ್ಲಿ ಕಲಿಯುವಿಕೆ, ಕಲಿಸುವಿಕೆ, ತಿಳಿಸುವಿಕೆ, ಚರ್ಚಿಸುವಿಕೆ, ಪರೀಕ್ಷೆಯಲ್ಲಿ ಪ್ರಶ್ನೆ ಕೇಳಿ ಆ ಪ್ರಶ್ನೆಗೆ ಉತ್ತರ ಗುರುತಿಸುವಿಕೆ ಇತ್ಯಾದಿಗಳು.

೧೮೧೭ರ ನಂತರ ರಚನೆಯಾದ ವ್ಯಾಕರಣ ಕೃತಿಗಳನ್ನು ಹೊಸಗನ್ನಡ ವ್ಯಾಕರಣ ಕೃತಿಗಳೆಂದು ಪರಿಗಣಿಸಿಕೊಂಡು ಇತ್ತೀಚಿನವರೆಗಿನ ಬಹುತೇಕ ಎಲ್ಲಾ ಕೃತಿಗಳನ್ನು ನೋಡಿದರೆ ಕೇಶಿರಾಜನ ಶಬ್ದಮಣಿದರ್ಪಣದ ಅರಿಸಮಾಸ ವಿಚಾರಗಳನ್ನೆ ಅನುಸರಿಸಿವೆ. ಪೂರ್ವಕವಿಗಳ ಪ್ರಯೋಗ ಮಾನ್ಯವೆಂಬ

ವಿಚಾರವನ್ನು ತಿಳಿಸುವಾಗ ಯಾವ ಕಾಲಘಟ್ಟಕ್ಕಿಂತ ಹಿಂದಿನ ಪೂರ್ವಕವಿಗಳು ಎಂಬುದನ್ನು ಬಹುತೇಕ ಕೃತಿಗಳು ಸ್ಪಷ್ಟಪಡಿಸುವುದಿಲ್ಲ.

ಹೊಸಗನ್ನಡದ ಸಮಾಸದ ಚರ್ಚೆಯೆಲ್ಲವು ಹಳಗನ್ನಡ ವ್ಯಾಕರಣ ಪರಂಪರೆಯನ್ನು ಅನುಸರಿಸಿ ಸಾಗಿದರೂ ಕೆಲವೊಂದು ವಿಚಾರಗಳಲ್ಲಿ ನಾವು ಸ್ಪಷ್ಟತೆಯತ್ತ ಸಾಗಬೇಕು. ಕಾರಣ ಹೊಸಗನ್ನಡದಲ್ಲಿ ಕಲಿಯುವಿಕೆ, ಕಲಿಸುವಿಕೆ, ತಿಳಿಸುವಿಕೆ, ಚರ್ಚಿಸುವಿಕೆ, ಪರೀಕ್ಷೆಯಲ್ಲಿ ಪ್ರಶ್ನೆ ಕೇಳಿ ಆ ಪ್ರಶ್ನೆಗೆ ಉತ್ತರ ಗುರುತಿಸುವಿಕೆಯಲ್ಲಿ ಕೆಲವು ಸಂದರ್ಭ ಮತ್ತು ಪರೀಕ್ಷೆಗಳಲ್ಲಿ ಅರಿಸಮಾಸವನ್ನು ಸಮಾಸಗಳಪಟ್ಟಿಯಲ್ಲಿ ಸೇರಿಸಿರುವುದು ಉದಾಹರಣೆಗೆ : ಮಂಗಳಾರತಿ ಎಂಬುದು ಸಮಾಸ ಎಂಬ ಪ್ರಶ್ನೆಗಳು ಶೈಕ್ಷಣಿಕ ಪರೀಕ್ಷೆಗಳಲ್ಲಿ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕಾಣುತ್ತಿವೆ.

೮) ಪ್ರಸ್ತುತ ಸಂದರ್ಭದಲ್ಲಿ ಬೇರೆ ಬೇರೆ ಭಾಷೆಯ ಪದಗಳೊಂದಿಗೆ ಕನ್ನಡ ಪದಗಳು ಸೇರಿ, ಸಮಾಸವಾಗುತ್ತಿರುವುದು ಅರಿಸಮಾಸದ ವ್ಯಾಪ್ತಿಯೊಳಗೆ ತರಬಹುದ?

ಈ ಪ್ರಶ್ನೆಯನ್ನು ಇಂಗ್ಲಿಷ್ ಭಾಷೆಯನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸಬೇಕಿದೆ. ಕಾರಣ ಇಂಗ್ಲಿಷ್ ಭಾಷೆಯ ಹಲವು ಪದಗಳು ಕನ್ನಡ ಭಾಷೆಗೆ ಸೇರುವುದರ ಜೊತೆಗೆ ಕನ್ನಡ ಪದಗಳೊಂದಿಗೆ ಇಂಗ್ಲಿಷ್ ಪದಗಳನ್ನು, ಇಂಗ್ಲಿಷ್ ಪದಗಳೊಂದಿಗೆ ಕನ್ನಡ ಪದಗಳನ್ನು ಸೇರಿಸಿ ಸಮಸ್ತ ಪದಗಳ ನಿರ್ಮಾಣ ಯಥೇಚ್ಚವಾಗಿ ಇತ್ತೀಚಿಗೆ ಕಂಡುಬರುತ್ತಿದೆ.

೯) ಪೂರ್ವಕವಿಗಳ ಪ್ರಯೋಗಗಳು ಮಾನ್ಯವೇಕೆ? ಬಿರುದಾವಳಿ, ಗಮಕಸಮಾಸ ಮತ್ತು ಕ್ರಿಯಾಸಮಾಸಗಳಲ್ಲಿ ವಿನಾಯ್ತಿ ಏಕೆ?.

ಈ ಪ್ರಶ್ನೆಗೆ ಉತ್ತರ ಹುಡುಕುವ ಮೊದಲು ಕನ್ನಡ ಸಂಸ್ಕೃತ ಪದಗಳ ಮಿಶ್ರಣಕ್ಕೆ ವೈಯಾಕರಣರಿಂದ ವಿರೋಧವೇಕೆ ಎಂಬುದರತ್ತ ಗಮನಹರಿಸಬೇಕು. ಈ ಹಿನ್ನಲೆಯಲ್ಲಿ ಕನ್ನಡ ಸಂಸ್ಕೃತ ಪದಗಳ ಮಿಶ್ರಣಕ್ಕೆ ವಿರೋಧಿಸಿದ್ದು ಈ ಕಾರಣಗಳಿಗಿರಬಹುದು. ಮಿಶ್ರಣದ ಪ್ರಕ್ರಿಯೆ ಹೆಚ್ಚಾದಂತೆ ಕನ್ನಡ ಭಾಷೆಯ ಮೂಲರೂಪ ಸಡಿಲಗೊಳ್ಳುತ್ತದೆಂಬ ಆತಂಕ. ಬೇರೆ ಬೇರೆ ಭಾಷೆಯ ಪದಗಳ ಮಿಶ್ರಣವಾದರೆ ಕಿವಿಗೆ ಕೇಳಲು ಹಿತವಾಗಿರುವುದಿಲ್ಲ ಅಥವಾ ಕರ್ಕಶವಾಗಿರುತ್ತದೆ. (ಶ್ರುತಿಕಷ್ಟ) (ಶೃತಿಕಷ್ಟ ಎಂಬುದು ಕಾವ್ಯದೋಷಗಳಲ್ಲಿ ಒಂದು ಎಂಬುದು ನಾವು

ಗಮನಿಸಬೇಕು). ಸಮಸ್ತ ಪದಗಳು ರಚನೆ ನಂತರ ಕಠಿಣವಾಗಿರಬಾರದು. ಈ ಕಾರಣದಿಂದಲೆ ಮಾರ್ಗಕಾರ ದೋಷಕ್ಕೆ ಉದಾರಣೆಯನ್ನು ೫೯ನೇ ಸೂತ್ರದಲ್ಲಿ ಹೇಳಿ ೬೦ನೇ ಸೂತ್ರದಲ್ಲಿ ದೋಷವನ್ನು ತಿದ್ದಿದ್ದಕ್ಕೆ ಉದಾಹರಣೆಗಳನ್ನು ಹೇಳಿದ್ದಾನೆ.

ಕೇಶಿರಾಜ ಶಬ್ದಮಣಿದರ್ಪಣದಲ್ಲಿ ಕನ್ನಡ ಸಂಸ್ಕೃತ ಪದಗಳ ಮಿಶ್ರಣ ಬೇಡವೆಂದು ಹೇಳಿ, ಪೂರ್ವಕವಿಗಳ ಪ್ರಯೋಗ, ಬಿರುದಾವಳಿಗಳು, ಗಮಕ ಸಮಾಸ, ಕ್ರಿಯಾಸಮಾಸಗಳಿಗೆ ಅರಿಸಮಾಸದಿಂದ ( ಕನ್ನಡ ಸಂಸ್ಕೃತ ಪದಗಳ ಮಿಶ್ರಣಕ್ಕೆ ಒಪ್ಪಿಗೆ) ವಿನಾಯ್ತಿ ನೀಡುತ್ತಾನೆ. ಇದಕ್ಕೆ ಕಾರಣ. ಪ್ರಯೋಗ ಶರಣ ವೈಯಾಕರಣ ಎಂಬ ಯೋಚನೆ ಇರಬಹುದು. ಅಥವಾ ಮಿಶ್ರಣಕ್ಕೆ ಹೇರಿದ್ದ ನಿರ್ಬಂಧವನ್ನು ಪಾಲಿಸುವುದು ಕಷ್ಟವೆಂಬುದನ್ನು ಮನಗಂಡಿರಬಹುದು. (ಕವಿರಾಜಮಾರ್ಗಕಾರ ವಿನಾಯ್ತಿ ಹೇಳಿಲ್ಲ). ಪೂರ್ವ ಕವಿಗಳು ಪ್ರಯೋಗ ಮಾನ್ಯ ಎಂದು ಹೇಳುವಾಗ, ಪರಿಗಣಿಸುವಾಗ, ಚರ್ಚಿಸುವಾಗ ಅಥವಾ ಬಳಸುವಾಗ ಕೇಶಿರಾಜನಿಗಿಂತ ಮೊದಲಿನ ಪೂರ್ವ ಕವಿಗಳ? ಭಟ್ಟಾಕಳಂಕನಿಗಿಂತ ಹಿಂದಿನ ಪೂರ್ವಕವಿಗಳ? ಏಕೆಂದರೆ ವಿನಾಯಿತಿ ಅಥವಾ ಮಾನ್ಯ ಇರುವುದು ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಇದನ್ನೇ ಬಹುತೇಕವಾಗಿ ಅನುಸರಿಸಿದ್ದು ಭಟ್ಟಾಕಳಂಕ. ಆದ್ದರಿಂದ ಹೊಸಗನ್ನಡದ ಸಂದರ್ಭದಲ್ಲಿ ಕೇಶಿರಾಜನಿಗಿಂತ ಮೊದಲಿನ ಪೂರ್ವಕವಿಗಳ ಪ್ರಯೋಗಗಳು ಮಾತ್ರ ಮಾನ್ಯವೆಂದು ಪರಿಗಣಿಸಬೇಕು. ಬಿರುದಾವಳಿ, ಗಮಕಸಮಾಸ ಮತ್ತು ಕ್ರಿಯಾಸಮಾಸಗಳಲ್ಲಿ ಮಿಶ್ರಣಕ್ಕೆ ನೀಡಿರುವ ಮಾನ್ಯತೆಗೆ ಸಂಬಂಧಿಸಿದಂತೆ"ಭಾಷೆಯ ಬೆಳವಣಿಗೆಯಲ್ಲಿ ಸಂಸ್ಕೃತ ಕನ್ನಡ ಶಬ್ದಗಳ ಸೇರಿಕೆಯ ನಿಯಮ ನಿಷ್ಠುರವಾಗಿರುವುದು ಶಕ್ಯವಿಲ್ಲ; ಶ್ರುತಿಹಿತವಾದ, ಜನರೂಢಿಯ ಪ್ರಯೋಗಗಳನ್ನು ಒಪ್ಪಿಕೊಳ್ಳುವುದು ತಪ್ಪಿಲ್ಲ"೨ ಎಂಬುದು ಸೂಕ್ತವೆನಿಸುತ್ತದೆ. ಇದರ ಜೊತೆಗೆ ತೆಕ್ಕುಂಜೆ ಗೋಪಾಲಕೃಷ್ಣಭಟ್ಟರು ಹೇಳುವ "ಸಂಖ್ಯಾಪೂರ್ವ ಗಮಕದ ಹೊರತು ಉಳಿದವುಗಳ ಪೂರ್ವಪದಗಳನ್ನು ವ್ಯಸ್ತವಾಗಿ ಪ್ರಯೋಗಿಸಲಾಗುತ್ತದೆ. ಆ ಕಾರಣದಿಂದಲೇ ಗಮಕಸಮಾಸದಲ್ಲಿ ಅರಿಸಮಾಸ ದೋಷವಿಲ್ಲ"ಎಂಬುದು ಮಹತ್ವಪೂರ್ಣವಾದುದು. ಈ ವಿದ್ವಾಂಸರ ಜೊತೆಗೆ ಕೇಶಿರಾಜನ ಅರಿಸಮಾಸ ವಿನಾಯ್ತಿಯ ವಿಚಾರವನ್ನು ೧೯೯೨ರಲ್ಲಿ ಹೊಸದಿಕ್ಕು ಎಂಬ ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆಯಲ್ಲಿ ಎಸ್.ಎಸ್ ಹಿರೇಮಠರ ಕೇಶಿರಾಜನ ವರ್ಗ ದೃಷ್ಟಿ ಎಂಬ ಲೇಖನದಲ್ಲಿ ಮಧ್ಯಕಾಲೀನ ಕನ್ನಡ ಸಾಹಿತ್ಯ,

ಸಾಂಸ್ಕೃತಿಕ ಪರಿಸರದ ದೃಷ್ಟಿಯಿಂದ ವರ್ಗದ ಹಿನ್ನಲೆಯಲ್ಲಿ ಚರ್ಚಿಸಿರುವುದು ಕುತೂಹಲಕಾರಿ.

೧೦) ದ್ರಾವಿಡ ಭಾಷೆಗಳು ಅರಿಸಮಾಸಕ್ಕೆ ಹೇಗೆ ಪ್ರತಿಕ್ರಿಯಿಸಿವೆ?

ಕನ್ನಡ ವೈಯಾಕರಣರಂತೆ ತೆಲುಗು ವೈಯಾಕರಣರು ಸಂಸ್ಕೃತ–ತೆಲುಗು ಪದಗಳ ಮಿಶ್ರಣವನ್ನು ನಿಷೇಧಿಸಿದ್ದಾರೆ. ಒಂದು ವೇಳೆ ಮಿಶ್ರಣವಾಗಿದ್ದರೆ ಅಥವಾ ಮಾಡಿದರೆ ಅದನ್ನು ಶತ್ರು ಅಥವಾ ವೈರಿ ಸಮಾಸವೆಂದು ಕರೆಯುತ್ತಾರೆ. ಆದರೆ ತಮಿಳು ಮತ್ತು ಮಲೆಯಾಳಂನಲ್ಲಿ ಸಂಸ್ಕೃತ ಪದಗಳ ಮಿಶ್ರಣಕ್ಕೆ (ಸಮಾಸಕ್ಕೆ) ಯಾವುದೇ ನಿಬರ್ಂಧವಿಲ್ಲ.

ಕೊನೆಟಿಪ್ಪಣಿ.


೧) ಹಳಗನ್ನಡ ವ್ಯಾಕರಣಗಳ ತೌಲನಿಕ ವಿಶ್ಲೇಷಣೆ–ದೊಡ್ಡಸ್ವಾಮಿ (ಪ್ರಕಟಣೆಯ ವರ್ಷ, ಪ್ರಕಾಶಕರ ಮಾಹಿತಿ ನನಗೆ ಲಭ್ಯವಿರುವುದಿಲ್ಲ)

೨) ದರ್ಪಣ ವಿವರಣ–ಡಾ.ಟಿ.ವಿ ವೆಂಕಟಾಚಲಶಾಸ್ತ್ರಿ, ಸಪ್ನಬುಕ್ ಹೌಸ್ ಬೆಂಗಳೂರು, ೨೦೧೦.